# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 771
ಸದಸ್ಯರ ಹೆಸರು : ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 25-09-2020.
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮ ಪಂಚಾಯಿತಿ ಚುನಾವಣೆಗಳಲ್ಲಿ ಸದಸ್ಯರುಗಳಿಗೆ ಮತ್ತು ಅಧ್ಯಕ್ಷರುಗಳಿಗೆ ಹಾಲಿ ಜಾರಿಯಲ್ಲಿರುವ ಮೀಸಲಾತಿ ಹಾಗೂ ಅದರ ಪ್ರವರ್ಗಗಳು ಯಾವುವು; | ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ಸದಸ್ಯರುಗಳಿಗೆ ಮತ್ತು ಅಧ್ಯಕ್ಷರುಗಳಿಗೆ ಹಾಲಿ ಜಾರಿಯಲ್ಲಿರುವ ಮೀಸಲಾತಿ ಹಾಗೂ ಪ್ರವರ್ಗಗಳು ಈ ಕೆಳಕಂಡಂತಿರುತ್ತದೆ.<br>1) ಅನುಸೂಚಿತ ಜಾತಿ<br>2) ಅನುಸೂಚಿತ (ಮಹಿಳೆ)<br>3) ಅನುಸೂಚಿತ ಪಂಗಡ<br>4) ಅನುಸೂಚಿತ ಪಂಗಡ (ಮಹಿಳೆ)<br>5) ಹಿಂದುಳಿದ "ಎ"ಪ್ರವರ್ಗ<br>6) ಹಿಂದುಳಿದ "ಎ"ಪ್ರವರ್ಗ (ಮಹಿಳೆ)<br>7) ಹಿಂದುಳಿದ "ಬಿ"ಪ್ರವರ್ಗ<br>8) ಹಿಂದುಳಿದ "ಬಿ"ಪ್ರವರ್ಗ (ಮಹಿಳೆ)<br>9) ಸಾಮಾನ್ಯ<br>10) ಸಾಮಾನ್ಯ (ಮಹಿಳೆ) |
| (ಆ) | ಸದರಿ ಮೀಸಲಾತಿ ಹಾಗೂ ಪ್ರವರ್ಗಗಳನ್ನು ನಿಗದಿಪಡಿಸಲು ಅನುಸರಿಸುತ್ತಿರುವ ಮಾನದಂಡಗಳು ಹಾಗೂ ಮಾರ್ಗಸೂಚಿಗಳೇನು; (ವಿವರವಾದ ಮಾಹಿತಿ ನೀಡುವುದು) | ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 5 ರಡಿಯಲ್ಲಿ ಜನಗಣತಿ ಜನಸಂಖ್ಯೆಯಂತೆ ಗ್ರಾಮ ಪಂಚಾಯತಿಗೆ ವರ್ಗವಾರು ಸದಸ್ಯರ ಸ್ಥಾನಗಳನ್ನು ರಾಜ್ಯ ಚುನಾವಣಾ ಆಯೋಗ ನಿರ್ದೇಶನದ ಮೇರೆಗೆ ಜಿಲ್ಲಾಧಿಕಾರಿಗಳು ನಿಗದಿಪಡಿಸುತ್ತಾರೆ. ಸದರಿ ಅಧಿನಿಯಮದಂತೆ ಜನಗಣತಿಯಲ್ಲಿ ಪ್ರಕಟಿಸಿರುವ ಜನಸಂಖ್ಯೆಯಂತೆ ಪ್ರತಿ ಗ್ರಾಮ ಪಂಚಾಯಿತಿಯ ಒಟ್ಟು ಜನಸಂಖ್ಯೆಯ 400 ಮತ್ತು ಅದರ ಭಾಗಕ್ಕೆ ಒಂದು ಸ್ಥಾನದಂತೆ ಒಟ್ಟು ಸ್ಥಾನಗಳನ್ನು ನಿಗದಿಪಡಿಸಲಾಗುತ್ತದೆ. ಹಾಗೂ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಜನಸಂಖ್ಯೆಯು ಯಾವ ಅನುಪಾತದಲ್ಲಿದೆಯೋ ಹಾಗೆ ಮೀಸಲಿಡಲಾದ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡದ ಸ್ಥಾನಗಳ ಸಂಖ್ಯೆಯು ಗ್ರಾಮ ಪಂಚಾಯಿತಿಯಲ್ಲಿನ ಸ್ಥಾನಗಳ ಒಟ್ಟು ಸಂಖ್ಯೆಯಲ್ಲಿ ಅದೇ ಅನುಪಾತದಲ್ಲಿರಬೇಕಾಗಿರುತ್ತದೆ. ಪ್ರತಿ ಗ್ರಾಮ ಪಂಚಾಯಿತಿಯಲ್ಲಿ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳಿಗಾಗಿ ಕನಿಷ್ಠ ಒಂದೊಂದು ಸ್ಥಾನಗಳನ್ನು ಮೀಸಲಿರಿಸಲಾಗುತ್ತದೆ.<br><br>ಗ್ರಾಮ ಪಂಚಾಯಿತಿಯ ಒಟ್ಟು ಸ್ಥಾನಗಳಲ್ಲಿ ಮೂರನೇ ಒಂದು (1/3) ಹಿಂದುಳಿದ ವರ್ಗದ ಸ್ಥಾನಗಳಿಗೆ ಮೀಸಲಿಡಲಾಗುತ್ತದೆ. (ಜನಗಣತಿಯಲ್ಲಿ ಪ್ರಕಟಿಸಿರುವ ಜನಸಂಖ್ಯೆಯ ಮಾಹಿತಿಯಲ್ಲಿ ಅನುಸೂಚಿತ ಜಾತಿ, ಅನುಸೂಚಿತ ಪಂಗಡ ಮತ್ತು ಸಾಮಾನ್ಯ ವರ್ಗದ ಜನಸಂಖ್ಯೆ ಮಾತ್ರ ಇರುತ್ತದೆ. ಉಳಿದಂತೆ ಹಿಂದುಳಿದ ವರ್ಗದ ಜನಸಂಖ್ಯೆ ವಿವರಗಳು ಇರುವುದಿಲ್ಲ.)<br>ನಿಯಮದಂತೆ, ಪ್ರತಿಯೊಂದು ವರ್ಗದಲ್ಲಿಯೂ ಶೇ.50ಕ್ಕೆ ಕಡಿಮೆ ಇಲ್ಲದಂತೆ ಮಹಿಳೆಯರಿಗೆ ಸ್ಥಾನಗಳನ್ನು ಮೀಡಲಿಡಲಾಗುವುದು. ಒಟ್ಟಾರೆಯಾಗಿ |

| | | |
|---|---|---|
| | | ಮಹಿಳೆಯ ಮೀಸಲಾತಿಯು ಶೇ.50ನ್ನು ಮೀರತಕ್ಕದ್ದಲ್ಲ.<br>ಒಟ್ಟಾರೆ ಮೀಸಲು (Reserved Seats) ಸ್ಥಾನಗಳು ಶೇ.50ನ್ನು ಮೀರತಕ್ಕದ್ದಲ್ಲ. |
| (ಇ) | ಸದರಿ ಮೀಸಲಾತಿ ಹಾಗೂ ಪ್ರವರ್ಗಗಳನ್ನು ಎಷ್ಟು ವರ್ಷಗಳಿಗೊಮ್ಮೆ ಬದಲಾವಣೆ ಮಾಡಲಾಗಿದೆ; ಬದಲಾವಣೆ ಮಾಡಲು ಯಾವ ಮಾನದಂಡಗಳನ್ನು ಅನುಸರಿಸಲಾಗುತ್ತದೆ; (ವಿವರವಾದ ಮಾಹಿತಿ ನೀಡುವುದು) | ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 5 (4)ರ ಪರಂತುಕದ ಪ್ರಕಾರ ಪ್ರತಿ 5 ವರ್ಷಗಳಿಗೆ ಗ್ರಾಮ ಪಂಚಾಯಿತಿ ಕ್ಷೇತ್ರಗಳಿಗೆ ಸರದಿ ಪ್ರಕಾರ (ರೊಟೇಷನ್ ರೀತ್ಯ) ಹಂಚಿಕೆ ಮಾಡಲಾಗುತ್ತದೆ.<br><br>ಕರ್ನಾಟಕ ಪಂಚಾಯತ್ ರಾಜ್ (ಗ್ರಾಮ ಪಂಚಾಯಿತಿಗಳಲ್ಲಿನ ಸ್ಥಾನಗಳನ್ನು ಆವರ್ತನೆಯ ಮೇಲೆ ಮೀಸಲಿಡುವ) ನಿಯಮಗಳು, 1998. ರಚಿಸಿದ್ದು ರಾಜ್ಯ ಚುನಾವಣಾ ಆಯೋಗದ ಸಾಮಾನ್ಯ ಅಥವಾ ವಿಶೇಷ ಆದೇಶಕ್ಕೆ ಒಳಪಟ್ಟು ಜಿಲ್ಲಾಧಿಕಾರಿಯವರು ಸದಸ್ಯ ಸ್ಥಾನಗಳನ್ನು ಕ್ಷೇತ್ರವಾರು ಹಂಚಿಕೆ ಮಾಡಿ ನಿಗದಿಪಡಿಸುತ್ತಾರೆ. ಸದರಿ ನಿಯಮದಂತೆ,<br>1) ಗ್ರಾಮ ಪಂಚಾಯಿತಿಗಳಲ್ಲಿ ಪರಿಶಿಷ್ಟ ಪಂಗಡಗಳಿಗೆ ಮೀಸಲಾದ ಸ್ಥಾನಗಳನ್ನು ಜಿಲ್ಲಾಧಿಕಾರಿಯವರು ಪಂಚಾಯಿತಿ ಪ್ರದೇಶದಲ್ಲಿ ಒಟ್ಟು ಜನಸಂಖ್ಯೆಗೆ ಹೋಲಿಸಲಾಗಿ ಪರಿಶಿಷ್ಟ ಪಂಗಡಗಳ ಜನಸಂಖ್ಯೆಯ ಶೇಕಡವಾರು ಅತಿ ಹೆಚ್ಚು ಇರುವಂತಹ ಮತ ಕ್ಷೇತ್ರಗಳಿಗೆ ಆವರ್ತನೆಯ ಮೇಲೆ ಹಂಚತಕ್ಕದ್ದಾಗಿರುತ್ತದೆ.<br>2) ಗ್ರಾಮ ಪಂಚಾಯಿತಿಯ ಪರಿಶಿಷ್ಟ ಜಾತಿಗಳಿಗೆ ಮೀಸಲಾದ ಸ್ಥಾನಗಳನ್ನು ಮೇಲೆ ತಿಳಿಸಿರುವ ರೀತಿಯಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಸದಸ್ಯರಿಗೆ ಆವರ್ತನೆ ಮೇರೆಗೆ ಹಂಚಿಕೆ ಮಾಡಬೇಕಾಗಿರುತ್ತದೆ.<br>3) ಹಿಂದುಳಿದ ವರ್ಗಗಳಿಗೆ ಮತ್ತು ಇತರ ಮೀಸಲಿರಿಸಿದ ಪ್ರವರ್ಗಗಳಿಗೆ ಗ್ರಾಮ ಪಂಚಾಯಿತಿಯಲ್ಲಿ ಮೀಸಲಿರಿಸಿದ ಸ್ಥಾನಗಳನ್ನು ಜಿಲ್ಲಾಧಿಕಾರಿಗಳು ತಾವು ಸೂಕ್ತವೆಂದು ಭಾವಿಸಬಹುದಾದ ಅಂಶಗಳನ್ನು ಪರಿಗಣನೆಗೆ ತೆಗೆದುಕೊಂಡು ಆವರ್ತನೆಯ ಮೇಲೆ ಹಂಚಬಹುದಾಗಿರುತ್ತದೆ.<br>ಈ ಬಗ್ಗೆ ಆಯೋಗದಿಂದ ಜಿಲ್ಲಾಧಿಕಾರಿಗಳಿಗೆ ಸೂಚನೆಗಳನ್ನು ನೀಡಲಾಗಿದೆ. ಅದರಂತೆ ಜಿಲ್ಲಾಧಿಕಾರಿಗಳು ವರ್ಗವಾರು ಸ್ಥಾನಗಳನ್ನು ನಿಗದಿಪಡಿಸಿ ಅಧಿಸೂಚಿಸಿರುತ್ತಾರೆ. |
| (ಈ) | ತುಮಕೂರು ಜಿಲ್ಲೆ, ತುರುವೇಕೆರೆ ತಾಲ್ಲೂಕಿನಲ್ಲಿ ಎಷ್ಟು ಗ್ರಾಮ ಪಂಚಾಯಿತಿಗಳು ಇವೆ; ಅವುಗಳ ವ್ಯಾಪ್ತಿಗೆ ಒಳಪಡುವ ಹಳ್ಳಿಗಳು ಯಾವುವು? (ಪಂಚಾಯಿತಿವಾರು ಮಾಹಿತಿ ನೀಡುವುದು) | ಗ್ರಾಮ ಪಂಚಾಯತಿವಾರು ಗ್ರಾಮಗಳ ವಿವರವನ್ನು ಅನುಬಂಧ-1 ರಲ್ಲಿ ನೀಡಿದೆ. |

ಸಂ. ಗ್ರಾಅಪ 730 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು